CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೦೪ (ಫಾಲ್ಗುಣ ೨೮, ಶಕ ವರ್ಷ ೧೯೨೫) | ಸಂಚಿಕೆ ೧೨ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ಟೆಂಡರ್ ಪ್ರಕಟಣೆ ಸಂಖ್ಯೆ: ಸಿಆಸುಇ 2 ಡಿಟಿಎಂ 2004, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ವಿಪ್ರೋ, ಹೆಚ್.ಪಿ. ಲೆಕ್ಸ್ ಮಾರ್ಕ್, ಎಪ್‌ಸನ್, ಕ್ಯಾನನ್, ನಮೂನೆಯ ಸುಮಾರು 480 ಪ್ರಿಂಟರ್‌ಗಳಿವೆ. ಈ ಪ್ರಿಂಟರ್‌ಗಳಿಗೆ ಪ್ರತಿ ವರ್ಷವೂ ಅಗತ್ಯವಿರುವ ಬಳಕೆ ಪದಾರ್ಥಗಳನ್ನು ಅಂದರೆ ಕಾಟ್ರಿಜ್, ರಿಬ್ಬನ್‌ಗಳು, ಕಂಪ್ಯೂಟರ್ ಕಂಟಿನ್ಯೂಸ್ ಸ್ಟೇಷನರಿ, ಫ್ಲಾಪಿಗಳು, ರಿರೈಟಬಲ್ ಸಿ.ಡಿ. ಮುಂತಾದವುಗಳನ್ನು ತಯಾರಕರಿಂದ ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಆಗ್ಗಿಂದಾಗ್ಗೆ ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ. ಸುಮಾರು ರೂ.7.00 ಲಕ್ಷ ಮೌಲ್ಯದ ಬಳಕೆ ಪದಾರ್ಥಗಳನ್ನು ಒಂದು ವರ್ಷದ ಅವಧಿಯಲ್ಲಿ ಖರೀದಿಸುವ ಸಾಧ್ಯತೆ ಇರುತ್ತದೆ. ಈ ಸಂಬಂಧ ಬಳಕೆ ಪದಾರ್ಥಗಳ ತಯಾರಕರಿಂದ ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಮೇಲಿನ ವಸ್ತುಗಳ ಸರಬರಾಜಿಗಾಗಿ ಒಂದು ವರ್ಷದ ಅವಧಿಗೆ ದರಗಳನ್ನು ನಿಗದಿಪಡಿಸಲು ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಇಚ್ಛೆಯುಳ್ಳ ತಯಾರಕರುಗಳಿಂದ ಅಥವಾ ಅವರ ಅಧಿಕೃತ ಮಾರಾಟಗಾರರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಲೆಕ್ಕಪತ್ರ) ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ, ಇಲ್ಲಿ ರೂ.100-00 + ಶೇಕಡ 8 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀತಿಯನ್ನು ಪಡೆದು ಅನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿ ರಸೀತಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ: 26.03.2004 ರಂದು ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ಮಾರಾಟ ಮಾಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 26.03.2004 ರಂದು ಮಧ್ಯಾಹ್ನ 3.30 ಗಂಟೆ ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಟೆಂಡರ್‌ಗಳನ್ನು ಟೆಂಡರ್ ಬುಲಿಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 27.03.2004 ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು.

1) ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2) ಅಧಿಕೃತ ಮಾರಾಟಗಾರರ ಬಗ್ಗೆ ದೃಢೀಕರಣ ಪತ್ರವನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.
3) ಮುಂಗಡ ಠೇವಣಿ ಮೊತ್ತವು ರೂ.5,000-00 ಗಳನ್ನು ಡಿ.ಡಿ. ಮುಖಾಂತರ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ. (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು. ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4) ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
5) ಸರಬರಾಜು ಮಾಡುವ ಸಾಮಗ್ರಿಗಳಿಗೆ 90 ದಿನಗಳವರೆಗಿನ ದರ ಸಿಂಧುತ್ವ ಇರಬೇಕು.

6) ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1) ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22092440 ರಲ್ಲಿ ಸಂಪರ್ಕಿಸಬಹುದು.

**ಹೆಚ್.ಕೆ. ರವಿಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 138 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ

### ಟೆಂಡರ್ ಮತ್ತು ಬಹಿರಂಗ ಹರಾಜು

**ಸಂಖ್ಯೆ: ಇಎಕ್ಸ್‌ಇ.ಸಿಆರ್‌ಎಂ.38:2003-2004, ತುಮಕೂರು, ದಿನಾಂಕ: 3ನೇ ಮಾರ್ಚ್ 2004**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗಿರುವ ಮೋಟಾರು ವಾಹನಗಳನ್ನು ಟೆಂಡರ್ ಮತ್ತು ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

ತುಮಕೂರು ಜಿಲ್ಲೆಯಲ್ಲಿ ವಿವಿಧ ಅಬಕಾರಿ ಮೊಕದ್ದಮೆಯಲ್ಲಿ ಒಳಗೊಂಡಿದ್ದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುವ 9 (ಒಂಭತ್ತು) ಲಾರಿ, 96 ಲಘು ವಾಹನಗಳು, ಇದರಲ್ಲಿ 4 ಕಾರು ಹಾಗೂ 83 ದ್ವಿಚಕ್ರ ವಾಹನಗಳು, 9 ಆಟೋ ರಿಕ್ಷಾಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತದೆ. ಶ್ರೀಮತಿ ಯಲ್ಲಮ್ಮ ಪುಟ್ಟಪ್ಪ, ಈಡೀಗರ ವಿದ್ಯಾರ್ಥಿ ನಿಲಯ, ರಾಮಕೃಷ್ಣನಗರ, ಕುಣಿಗಲ್ ರಸ್ತೆ, ತುಮಕೂರು ಈ ಆವರಣದಲ್ಲಿ ದಿನಾಂಕ: 25.03.2004 ರಂದು ಬೆಳಿಗ್ಗೆ 11.00 ಗಂಟೆಗೆ ಹರಾಜನ್ನು ನಿಗದಿಪಡಿಸಲಾಗಿದೆ. ಅಬಕಾರಿ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರು ಹರಾಜು ನಿರ್ವಾಹಕ ಅಧಿಕಾರಿಯಾಗಿದ್ದು, ಹರಾಜನ್ನು ನಡೆಸುವರು.

ಮೇಲ್ಕಂಡ ಮುಟ್ಟುಗೋಲು ಹಾಕಲಾದ ಮೋಟಾರು ವಾಹನಗಳನ್ನು ಸಾರ್ವಜನಿಕ ವೀಕ್ಷಣೆ : ಪರಿಶೀಲನೆಗಾಗಿ ಮೇಲ್ಕಾಣಿಸಿದ ಸ್ಥಳದಲ್ಲಿ ನಿಲ್ಲಿಸಿದ್ದು ದಿನಾಂಕ: 23.03.2004 ರಿಂದ ಸಾರ್ವಜನಿಕರು ಹರಾಜು ನಡೆಯುವ ಸ್ಥಳದಲ್ಲಿ ವೀಕ್ಷಿಸಬಹುದು.

ಈ ಟೆಂಡರ್ ಮತ್ತು ಬಹಿರಂಗ ಹರಾಜಿಗೆ ಸಂಬಂಧಿಸಿದ ನಿಬಂಧನೆಗಳು ಷರತ್ತುಗಳಿಗೆ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ ಅಥವಾ ಯಾವುದೇ ತಾಲ್ಲೂಕಿನ ಅಬಕಾರಿ ವಲಯ ಕಛೇರಿಗಳನ್ನು ಸಂಪರ್ಕಿಸಬಹುದು. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 25.03.2004 ರಂದು ಬೆಳಿಗ್ಗೆ 10.00 ಗಂಟೆಯೊಳಗಾಗಿ ಈ ಹರಾಜು ಸ್ಥಳಕ್ಕೆ ಅಥವಾ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ತುಮಕೂರು ಜಿಲ್ಲೆ, ತುಮಕೂರು ಇವರ ಕಛೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ಪಿ.ಆರ್. 139 ತುಮಕೂರು ಜಿಲ್ಲೆ, ತುಮಕೂರು.

## SPECIAL RECRUITMENT COMMITTEE
## DIRECTORATE OF HEALTH & FAMILY WELFARE SERVICES, BANGALORE-560 009
### NOTIFICATION No. DRC/42(1)/98-99, dated: 14th November 2003

**Sub:** Publication of Revised Select List of candidates for recruitment to 21 posts of Asst. Entomologist

**Ref:** 1) Govt. Notification No. DPAR/2/SRD/98, dated: 3.10.98 and 17.7.1999.
2) Notification No. DRC/42(1)/98-99, dated: 6.2.99 of the Special Recruitment Committee published in Gazette dated: 3.3.99 (inviting applications)
3) Notification No. DRC/42(1)/98-99 dated: 29.9.2000 (published Final Select List with rural weightage)
4) Govt. Circular No. DPAR/45/SENENI/2003, dated: 2.7.2003.

In pursuance of the Govt. Circular cited at reference (4), the Revised Select List of candidates without rural weightage for recruitment for 21 posts of Asst. Entomologist in the Dept. of Health & Family Welfare Services prepared in accordance to the Rule 7 of Karnataka Civil Services (Direct Recruitment by Selection) Rules 1973 is published for information of all concerned.

**G.A. ADAGATTI**

Member/Secretary

Special Recruitment Committee.

## SPECIAL RECRUITMENT COMMITTEE DEPARTMENT OF HEALTH & FAMILY WELFARE
## DIRECTORATE OF HEALTH & FAMILY WELFARE, BANGALORE
### NOTIFICATION No. DRC/42(1)/98-99, dated: 14th November 2003
### REVISED SELECT LIST FOR THE POST OF ASST. ENTOMOLOGIST IS PUBLISHED HEREWITH FOR INFORMATION OF ALL CONCERNED

1. Selections are made in accordance with the provisions of Special Recruitment Rules issued in Govt. Notification No. DPAR/2/SRD/98, dated: 03.10.1998 & 17.07.1999.

2. Candidates who do not possess the requisite qualification prescribed in the Special Rules and satisfy all other requirements are not considered for selection.
3. As already stipulated in Notification dated: 06.02.1999 (published in Gazette dated: 03.03.1999), the Selection Committee has not considered any document (Marks Cards/Caste Income Certificate/Other reservations) which are dated: after 07.04.1999 i.e., the last date fixed for receipt of completed applications.
4. The Selection Committee reserves the right to review the selection of any candidate at any point of time and if found ineligible the selection is liable to be cancelled.
5. Selections are subject to final results in Court cases.

**G.A. ADAGATTI**
Member/Secretary
Special Recruitment Committee.

P.R. 137

**PUBLIC WORKS DEPARTMENT**
**(NATIONAL HIGHWAYS)**
**Office of the Executive Engineer, N.H. Special Division, Bangalore**
**TENDER NOTIFICATION**
**(Two Cover Bid System)**
**No.EE/NH.Spl.Dn/AE-1/NH-206/NIT-7/2003-2004/1263, Dated: 27th February 2004**

Sealed Item Rate Tenders for the works noted below under TWO COVER BID SYSTEM as per Karnataka Transparency in Public procurement Act 2000 in prescribed form in duplicate is invited from the Class-I Contractors registered in KPWD/M.O.R.T. & H approved Firms. Two cover bid system of tendering consists of "Technical Bid" and "Financial Bid". Bids will be received in two parts in two different sealed covers marked as "Technical Bid" and "Financial bid". These two covers shall be sealed and kept in another sealed cover duly superscribing name of the work and shall be addressed to the undersigned with name and full postal address of the bidder. Completed bids will be received in the office of the Superintending Engineer, National Highway Circle, Bangalore or in the office of the Executive Engineer, National Highway Special division, Bangalore up to 4.00 P.M. on 19.03.2004, subject to the conditions laid down in form No.PWG 65, 66 of KPWD code Vol. II, Special Conditions contained in the schedules and in Karnataka Transparency in Public Procurement Act 2000. The Technical Bids will be opened by the undersigned on the dates noted below. Financial Bids of only those bidders who qualify in the Technical Bids shall be opened. If any one of the dates below happens to be a general holiday, the next convenient day will be intimated.

| Sl. No. | Name of work | Amount put to Tender (Rs.in lakhs) 170.36 | EMD Rs. in lakhs | Cost of Tender Forms Non refundable | Nature of work | Time for completion of work (Excluding) monsoon) |
|---|---|---|---|---|---|---|
| 1) | Windening to two lane with strengthening from Km. 40.00 to Km. 44.00 of NH-206 Tumkur-Honnavar section | 170.36 | 1.71 | Rs.25,000/- + Taxes | WBM BM, SDBC Culverts Embankment | 4 Months |

**GENERAL CONDITIONS:-**

1. The contractors interested in bidding for the work may submit an application to the undersigned along with cost of tender documents (non-refundable) to be paid in the form of DD drawn in favour of Executive Engineer, N.H. Special Division., Bangalore payable at Bangalore along with application. The applicants should submit proof of registration, and Karnataka Sales Tax Clearance certificate obtained from the concerned Departments while submitting the applications for tender schedules, otherwise the applications will not be considered.

The Schedule of dates is as under:-

a. Last date for receipt of Application — 15.03.2004 Up to 5.00 P.M.
b. Issue of Blank Tender Schedules — 17.03.2004 Up to 5.30 P.M.
c. Last date for submission of Technical & Financial Bid — 19.03.2004 Up to 4.00 P.M.
d. Opening of Technical bid — 19.03.2004 at 4.30 P.M.

**CONDITIONS FOR TECHNICAL BIDS:**

1. The EMD in the form of DD/FDR/Pay Order/Bank Guarantee drawn from a Nationalised or Scheduled Bank or NSC (pledged in favour of undersigned only) shall be enclosed with the Technical bid. The EMD pledged in favour of any other authority than the undersigned will be

disqualified without entertaining any enquiries/clarifications. The Bank Guarantee shall be strictly as specified in PWG 66 supplied with the tender form.

2. The defect liability period for the work in this notification will be (i) Three years (in case of strengthening, widening with strengthening, IRQP works) (ii) Two years (in case of new formations not involving strengthening course, widening, Periodical Renewal works) & (iii) Five years (in case of Bridges & culverts) reckoned from the date of completion of work. The items of work to be executed being of very high standards shall not require any repairs for three years after completion of the same. If the stretch or structure notified require any repair during defect liability period, the contractor/firm shall re do the same at contractor's/ firms own cost. The EMD/SD tools shall be accordingly produced.
3. Each tenderer shall own following machinery and enclose with the technical bid evidence of ownership, as detailed under. The technical bids submitted without the evidence of ownership as detailed are liable for disqualification.

| Sl.No. | Machinery | Numbers | Evidence of ownership to be furnished |
|---|---|---|---|
| | For Road Works:- | | |
| i) | Hot Mix plant of 40/60 TPH or Higher capacity (as per MORT & H specification) | ONE | Copy of purchase invoice/sale deed with a copy of purchase Invoice from the seller. |
| ii) | Paver Finisher with Mechanical | ONE | -do- |
| iii) | Static road roller | TWO | -do- |
| iv) | Vibratory Roller | ONE | -do- |
| v) | Mechanical sprayer | TWO | -do- |
| vi) | Concrete Mixer | TWO | -do- |
| vii) | Vibrators | FOUR | -do- |
| viii) | Tipper | SIX | Copy of RC, FC, TC permit from RTO |

4. Each Tenderer should have individually satisfactorily completed works of similar nature of value not less than 30% of the value of work in this Notification (up dated at 10% per annum compoundable) in any one financial year during a block period of previous five financial years. Alternatively, the contractor should have completed a billing of 30% of the value of work in this notification, during the current financial year for same nature of work. The experience certificate in this regard should invariably have a mention of nature/items of work executed; otherwise the technical bid is liable for disqualification.
5. For proof of Financial capacity, "Line of Credit" from any Scheduled Bank shall be invariably produced for the particular work in the proforma prescribed in the technical bid for an amount equal to 30% of the amount put to tender. Failure to submit the line of credit along with technical bid leads to disqualification.
6. All documents enclosed in support of technical bids, shall be attested by a Gazetted Officer not below the rank of Dist, Level Officer, otherwise, the bids are liable for disqualification. The original documents should be produced for verification at any stage of tender process as and when Sought for. Failure to produce original documents leads to disqualification of technical bids.
7. Only relevant certificates and details shall be furnished with the technical bid Details of Company/Agencies/Firms profile be enclosed.
8. Tendering by joint venture is not allowed.
9. The Competent Authority reserves the right to reject any or all the tenders without assigning any reasons thereof.
10. Conditional tenders will not be accepted.

Any other details regarding the work, can be obtained from the above office during the office hours.

Executive Engineer,
N.H. Special Division, Bangalore.

P.R. 136

**FORM - IV**
**(See Rule 12)**
**NOTICE**

It is hereby notified that the undersigned has changed his/her name from **MALIKASAHEB PEERASA PINJAR** to **MALIKASAHEB PEERASA NADAF.**

PD. 41 **MALIKASAHEB PEERASA NADAF**

## ಜಿಲ್ಲಾ ಪೊಲೀಸ್ ಕಛೇರಿ, ಕೊಡಗು ಜಿಲ್ಲೆ

**ಅಧಿಸೂಚನೆ ಸಂಖ್ಯೆ: ಪಿಎಂಟಿ/159/2003-04, ದಿನಾಂಕ: 22ನೇ ಫೆಬ್ರವರಿ 2004**

**ವಿಷಯ:** ಕೊಡಗು ಜಿಲ್ಲೆಯ ಪೊಲೀಸ್ ಘಟಕದಲ್ಲಿರುವ ನಿರುಪಯುಕ್ತ ಐದು ಡೀಸಲ್ ಜೀಪುಗಳನ್ನು ಟೆಂಡರು ಅಥವಾ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ ಬೆಂಗಳೂರುರವರ ಪತ್ರ ಸಂಖ್ಯೆ: ವಾಸಾ(1)/3/2003-04, ದಿನಾಂಕ: 3.12.2003.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಕೊಡಗು ಜಿಲ್ಲೆ, ಮಡಿಕೇರಿ ಈ ಕಛೇರಿಯ ಮುಂಭಾಗದಲ್ಲಿ ಯಥಾ ಸ್ಥಿತಿಯಲ್ಲಿರುವ ಈ ಕೆಳಕಂಡ 5 ಡೀಸಲು ಜೀಪುಗಳನ್ನು ಟೆಂಡರು ಅಥವಾ ಸಾರ್ವಜನಿಕ ಬಹಿರಂಗ ಹರಾಜು (ಟೆಂಡರು ಕಂ ಆಕ್ಷನ್) ಮೂಲಕ ಕೊಡಗು ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣದಲ್ಲಿ ದಿನಾಂಕ: 12.4.2004 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

| ಕ್ರ.ಸಂ. | ವಾಹನದ ನೋಂದಣಿ ಸಂಖ್ಯೆ | ಮಾಡೆಲ್ | ಖರೀದಿಸಿದ ವರ್ಷ |
|---|---|---|---|
| 1. | ಎಂವೈಜಡ್ 3402 | ಮಹೇಂದ್ರ ಜೀಪು (ಡೀಸಲ್) | 1977 |
| 2. | ಸಿಎಜಿ 4447 | ” | 1986 |
| 3. | ಸಿಎಜಿ 4431 | ” | 1982 |
| 4. | ಸಿಎಜಿ 4438 | ” | 1983 |
| 5. | ಎಂವೈಜಡ್ 7511 | ” | 1980 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ "ನಿರುಪಯುಕ್ತ ವಾಹನ ಸಂಖ್ಯೆ ...... ಖರೀದಿಸುವ ಬಗ್ಗೆ" ಎಂಬುದನ್ನು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಸವಾಲುದಾರನು ವಾಹನಕ್ಕೆ ರೂ.1,000-00 (ರೂ. ಒಂದು ಸಾವಿರ ಮಾತ್ರ) ಠೇವಣಿ ಹಣವನ್ನು ನಗದು ಮೂಲಕ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿರವರ ಹೆಸರಿನಲ್ಲಿ ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಕಳುಹಿಸಲಾದ ಅರ್ಜಿಯನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 8.4.2004ರ ಸಂಜೆ 4.00 ಗಂಟೆಯೊಳಗಾಗಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
6. ಟೆಂಡರ್‌ದಾರರು ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು. ಸವಾಲು ಮೂಲಕ ಹರಾಜು ಮಾಡಲಾಗುವುದು. ಸವಾಲುದಾರರು (ಟೆಂಡರುದಾರರನ್ನು ಉಳಿದು) ಠೇವಣಿ ರೂಪದಲ್ಲಿ ವಾಹನಕ್ಕೆ ರೂ.1,000-00 ಗಳನ್ನು ಸ್ಥಳದಲ್ಲಿ ಪಾವತಿ ಮಾಡಲು ಅವಕಾಶವಿರುತ್ತದೆ.
7. ಜಿಲ್ಲಾ ಪೊಲೀಸ್ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರುದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರುಗಳನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗ ಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್/ ಸವಾಲುದಾರರೆಂದು ಪರಿಗಣಿಸಲಾಗುವುದು. ಮೊತ್ತ ಮೊದಲಿಗೆ ಬಹಿರಂಗ ಹರಾಜು ನಡೆಸಲಾಗುವುದು. ನಂತರ ಟೆಂಡರುಗಳನ್ನು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರುದಾರರು / ಸವಾಲುದಾರರು ವಾಹನಗಳ ಒಟ್ಟು ಬೆಲೆಯ ಶೇ.25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ ಬೆಂಗಳೂರು ರವರು ಸದ್ರಿ ಹರಾಜನ್ನು ಅಂಗೀಕರಿಸಿದ ನಂತರ ಸಂಪೂರ್ಣ ಹಣ ಪಾವತಿ ಮಾಡಿ, ತಮ್ಮ ಸ್ವಂತ ಖರ್ಚಿನಿಂದ ಹಾಗೂ ಏಳು ದಿನಗಳೊಳಗಾಗಿ ವಾಹನವನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಈಗಾಗಲೇ ಅವರು ತುಂಬಿದ ಶೇ.25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಲಾಗುವುದು.
10. ಎಲ್ಲಾ ಹಣವನ್ನು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು/ಡಿ.ಡಿ. ಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರ/ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಸ್ಥಳದಲ್ಲಿ ಹಿಂದಿರುಗಿಸಲಾಗುವುದು.
12. ಮಾರಾಟ ತೆರಿಗೆಯನ್ನು ಹಾಗೂ ಇತರ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.

13. ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಜಿಲ್ಲಾ ಪೊಲೀಸ್ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
14. ಹರಾಜಿನಲ್ಲಿ ಯಾವುದೇ ಸವಾಲನ್ನು/ಟೆಂಡರನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿರವರು ಹೊಂದಿರುತ್ತಾರೆ. ಇದರ ಮೇಲೆ ಯಾರ ಅಧಿಕಾರ ಇರುವುದಿಲ್ಲ. ಇವರ ನಿರ್ಣಯವೇ ಅಂತಿಮವಾದದ್ದು.
15. ಇಚ್ಛೆಯುಳ್ಳ ಟೆಂಡರುದಾರರು ಮತ್ತು ಸವಾಲುದಾರರು ಹರಾಜು ಮಾಡಲಿಕ್ಕಿರುವ ಹೇಗಿದೆಯೋ ಹಾಗೆ ಇರುವ ನಿರುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಕೊಡಗು ಜಿಲ್ಲೆ, ಮಡಿಕೇರಿ ಇವರ ಕಛೇರಿಯ ವೇಳೆಯಲ್ಲಿ ನೋಡಬಹುದು.
16. ಟೆಂಡರುದಾರರು ವಾಹನಕ್ಕೆ ಅತೀ ಹೆಚ್ಚಿನ ಬೆಲೆಯನ್ನು ಈ ಕೆಳಕಂಡ ನಮೂನೆಯಲ್ಲಿ ತೋರಿಸಬೇಕು.

ಜಿಲ್ಲಾ ಪೊಲೀಸ್ ಅಧಿಕಾರಿಗಳು, ದಿನಾಂಕ:
ಕೊಡಗು ಜಿಲ್ಲೆ, ಮಡಿಕೇರಿ.

ಮಾನ್ಯರೇ,

ನಾನು ಈ ಮೂಲಕ ಕೆಳಗೆ ತೋರಿಸಿದ ವಾಹನಕ್ಕೆ ಅತೀ ಹೆಚ್ಚಿನ ಬೆಲೆಯನ್ನು ತೋರಿಸ (ನಮೂದಿಸಿ) ಬಯಸುತ್ತೇನೆ. ನಿಮ್ಮ ಅಧಿಸೂಚನೆ ಸಂಖ್ಯೆ ಪಿಎಂಟಿ/......../2003-2004, ದಿನಾಂಕ:....................ರ ನಿಮಯ ಮತ್ತು ಷರತ್ತುಗಳಿಗೆ ಒಪ್ಪಿಕೊಂಡು ರೂ...................ಗಳನ್ನು ಠೇವಣಿ ಸಂದಾಯ ಮಾಡಿರುತ್ತೇನೆ.

| ಕ್ರ.ಸಂ. | ವಾಹನ ಸಂಖ್ಯೆ | ಅತೀ ಹೆಚ್ಚಿನ ಬೆಲೆ | ಷರಾ |
|---|---|---|---|
| | | | |

1. .................................................. ರೂ. ..................................

ವಿಶೇಷ ಅಧಿಸೂಚನೆ:- ಬೆಲೆಗಳನ್ನು ಅಕ್ಷರ ಮತ್ತು ಅಂಕಿಗಳಲ್ಲಿ ನಮೂದಿಸಬೇಕು.

ನಿಮ್ಮ ವಿಶ್ವಾಸಿ
(ಟೆಂಡರುದಾರರ ಸಹಿ) ಮತ್ತು ಪೂರ್ಣವಿಳಾಸ

ಪಿ.ಆರ್. 135 ಪೊಲೀಸ್ ಸೂಪರಿಂಟೆಂಡೆಂಟ್, ಕೊಡಗು ಜಿಲ್ಲೆ.

**ನಮೂನೆ-1**
**9ನೇ ನಿಯಮ ನೋಡಿ**
**ಆರೋಗ್ಯ ಇಲಾಖೆ**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು-9**
**ಅಧಿಸೂಚನೆ**
**ದಿನಾಂಕ: 26ನೇ ಫೆಬ್ರವರಿ 2004.**

**Shri KADARAPPA** Working as Junior Health Assistant (male) in the Health & F.W.S. Department of/ Office of Primary Health Centre, Turuvekere is permitted to change his/her Name to **SRIHARI GANESH.**

ನಿರ್ದೇಶಕರು,
ಪಿ.ಡಿ. 42 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-9.

**FORM - IV**
**(See Rule 12)**
**NOTICE**

It is hereby notified that the undersigned has changed his/her name from **HANAMANT SHIVAPPA HARIJAN** to **HANAMANT SHIVAPPA ARJANAGI.**

PD. 40 **HANAMANT SHIVAPPA ARJANAGI**

**ತೋಟಗಾರಿಕೆ ಇಲಾಖೆ**
**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, P.O.Box-7648, ಬೆಂಗಳೂರು-76**
**ಟೆಂಡರ್ ಪ್ರಕಟಣೆ ಸಂ:ತೋಇ:ಜೀವತಾ:ಹಿಸತೋನಿ(ಅಂಕ್ರ):ಸತೋಅ1:80:2003-2004, ದಿನಾಂಕ: 25ನೇ ಫೆಬ್ರವರಿ 2004**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು-76 ಇಲ್ಲಿ ಸ್ಥಾಪಿಸಲಾಗಿರುವ ಅಂಗಾಂಶ ಕೃಷಿ ಪ್ರಯೋಗಶಾಲೆ, ಸಸ್ಯ ಪೋಷಕಾಂಶ ಪ್ರಯೋಗಶಾಲೆ, ಗುಣಮಟ್ಟ ನಿಯಂತ್ರಣ, ಪ್ರಯೋಗಶಾಲೆ ಅಣಬೆ ಪ್ರಯೋಗಶಾಲೆ, ಡಿಎನ್ಎ ಫಿಂಗರ್ ಪ್ರಿಂಟಿಂಗ್ ಪ್ರಯೋಗಶಾಲೆ ಹಾಗೂ ಹುಳಿಮಾವು ತೋಟಗಾರಿಕೆ ಕ್ಷೇತ್ರಗಳ ವಿವಿಧ ಪ್ರಯೋಗಶಾಲಾ ಕೆಲಸಗಳು, ಸಸ್ಯಾಭಿವೃದ್ಧಿ ಕೆಲಸಗಳು, ತೋಟಗಾರಿಕೆ ಕೆಲಸಗಳು, ಯಂತ್ರೋಪಕರಣಗಳ ನಿರ್ವಹಣಾ ಕೆಲಸಗಳು ಇತ್ಯಾದಿ ಕೆಲಸಗಳನ್ನು 2004-05ನೇ ಸಾಲಿನಲ್ಲಿ ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ ವಿವಿಧ ಸಂಸ್ಥೆಗಳು, ಗುತ್ತಿಗೆದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ ತಗಲುವ ವೆಚ್ಚವನ್ನು ಪ್ರಯೋಗಶಾಲೆಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕ ಟೆಂಡರುಗಳಲ್ಲಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ ಮಾಹಿತಿಗಳನ್ನು ಹಿರಿಯ ಸಹಾಯಕ ತೋಟಗಾರಿಕೆ

ನಿರ್ದೇಶಕರು, ಅಂಗಾಂಶ ಕೃಷಿ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ 16-03-2004 ರಿಂದ 27-03-04ರ ಒಳಗೆ ಪಡೆಯಬಹುದು

ಟೆಂಡರ್ ಫಾರಂನ ಮೊತ್ತ ರೂ. 25/- ಮೊಹರಾದ ಟೆಂಡರುಗಳ ಮೇಲೆ ಅಂಗಾಂಶ ಕೃಷಿ ಪ್ರಯೋಗಶಾಲೆ/ಸಸ್ಯ ಪೋಷಕಾಂಶ ಪ್ರಯೋಗಶಾಲೆ/ಗುಣಮಟ್ಟ ನಿಯಂತ್ರಣ ಪ್ರಯೋಗಶಾಲೆ/ಅಣಬೆ ಪ್ರಯೋಗಶಾಲೆ/ಡಿಎನ್ಎ ಫಿಂಗರ್ ಪ್ರಿಂಟಿಂಗ್ ಪ್ರಯೋಗಶಾಲೆ/ ಹುಳಿಮಾವು ತೋಟಗಾರಿಕೆ ಕ್ಷೇತ್ರಗಳ ವಿವಿಧ ಪ್ರಯೋಗಶಾಲಾ ಕೆಲಸಗಳು, ಸಸ್ಯಾಭಿವೃದ್ಧಿ ಕೆಲಸಗಳು, ತೋಟಗಾರಿಕೆ ಕೆಲಸಗಳು, ಯಂತ್ರೋಪಕರಣಗಳ ನಿರ್ವಹಣಾ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ ಟೆಂಡರು ಎಂದು ಪ್ರತ್ಯೇಕವಾಗಿ ನಮೂದಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರಿಗೆ ದಿನಾಂಕ 29-03-2004 ರ 2.00 ಘಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಘಂಟೆಗೆ ತೆರೆಯಲಾಗುವುದು.

ತೋಟಗಾರಿಕೆ ನಿರ್ದೇಶಕರು

**ಟೆಂಡರ್ ನಿಯಮಾವಳಿಗಳು**

1. ಟೆಂಡರ್ ಫಾರಂ ಬೆಲೆ ರೂ. 25/- ಮಾತ್ರ ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫಾರಂ ಹಣ ಹಿಂತಿರುಗಿಸಲಾಗುವುದಿಲ್ಲ.
2. ಟೆಂಡರ್ ಫಾರಂನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಮಾತ್ರ ಕೊಡಲಾಗುತ್ತದೆ. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
3. ಟೆಂಡರ್ ಫಾರಂ ದಿನಾಂಕ 16-03-2004 ರಿಂದ 27-03-2004 ರ ಸಂಜೆ 5-00 ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಸ್ಸು ನೀಡಲು ಅಂತಿಮ ದಿನಾಂಕ 29-03-2004 ಮಧ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
4. ಟೆಂಡರನ್ನು ದಿನಾಂಕ 29-03-2004 ರಂದು ಸಂಜೆ 4.00 ಘಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.
5. ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ವಿವಿಧ ಪ್ರಯೋಗಶಾಲಾ ಕೆಲಸಗಳು, ಸಸ್ಯಾಭಿವೃದ್ಧಿ ಕೆಲಸಗಳು, ತೋಟಗಾರಿಕೆ ಕೆಲಸಗಳು, ಯಂತ್ರೋಪಕರಣಗಳ ನಿರ್ವಹಣಾ ಕೆಲಸಗಳು ಇತ್ಯಾದಿ ಕೆಲಸಗಳನ್ನು 2004-05ನೇ ಸಾಲಿನಲ್ಲಿ ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ಸರಬರಾಜು ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.
6. ಸೇವಾ ತೆರಿಗೆ ಮತ್ತು ವಿಮೆ ಎಲ್ಲವನ್ನು ಸೇರಿಸಿ ತಗಲುವ ಕನಿಷ್ಠ ದರವನ್ನು ನಮೂದಿಸುವುದು.
7. ಟೆಂಡರುದಾರರು ಗುತ್ತಿಗೆ ಆಧಾರದ ಮೇಲೆ ವಿವಿಧ ಕೆಲಸಗಳನ್ನು ಕೈಗೊಳ್ಳುವ ಬಗ್ಗೆ ಪ್ರತಿ ಪ್ರಯೋಗಶಾಲೆಗೆ ಸಂಬಂಧ ಪಟ್ಟಂತೆ ರೂ. 5,000/- ರಷ್ಟು ಇ.ಎಂ.ಡಿ. (ಭದ್ರತಾ ಠೇವಣಿ) ಮೊಬಲಗನ್ನು ಡಿಡಿಯ ಮುಖಾಂತರ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬೆಂಗಳೂರು ರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು.
8. ತಾಂತ್ರಿಕ ಮತ್ತು ಆರ್ಥಿಕ ಟೆಂಡರ್ ಬಿಡ್ಡುಗಳನ್ನು ಪ್ರತ್ಯೇಕವಾಗಿ ಸಲ್ಲಿಸಬೇಕು.
9. ಗುತ್ತಿಗೆ ಆಧಾರದ ಮೇಲೆ ಕೆಲಸಗಳನ್ನು ನಿರ್ವಹಿಸುವ ಬಗ್ಗೆ ಈ ಹಿಂದೆ ಯಾವುದೇ ಸರ್ಕಾರಿ/ಖಾಸಗಿ ಪ್ರಯೋಗಶಾಲೆಗಳಲ್ಲಿ/ತೋಟಗಾರಿಕೆ ಕ್ಷೇತ್ರಗಳಲ್ಲಿ ಕನಿಷ್ಠ 2 ವರ್ಷಗಳ ಕಾಲ ಕಾರ್ಯ ನಿರ್ವಹಿಸಿರುವ ಬಗ್ಗೆ ಅನುಭವ ಹೊಂದಿದವರಿಗೆ ಆದ್ಯತೆ ನೀಡಲಾಗುವುದು.
10. ಸಂಸ್ಥೆಯವರು ತಮ್ಮ ಆದಾಯ ತೀರುವಳಿ ದೃಢೀಕರಣ ಪತ್ರವನ್ನು (ಅಂತಿಮವಾಗಿ ಸಲ್ಲಿಸಿರುವ) ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು.
11. ಯಾವುದೇ ಕಾರಣ ನೀಡದೇ ಟೆಂಡರ್ ಸ್ವೀಕರಿಸಿದ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳಸಹಿದಾರರಿಗೆ ಕಾಯ್ದಿರಿಸಲಾಗಿದೆ.
12. ಗುತ್ತಿಗೆ ಆಧಾರದ ಮೇಲೆ ವಿವಿಧ ಕೆಲಸಗಳನ್ನು ಕೈಗೊಳ್ಳುವ ಬಗ್ಗೆ ಆದೇಶ ನೀಡಿದ 30 ದಿನಗಳ ನಂತರ, ಕಾರ್ಯಕ್ಷಮತೆ ಹಾಗೂ ಗುಣಮಟ್ಟದ ಬಗ್ಗೆ ತೃಪ್ತಿಯಾದ ಮೇಲೆ ಹಣ ಬಿಡುಗಡೆ ಮಾಡಲಾಗುವುದು.
13. ಸರ್ಕಾರದ ನಿಯಾವಳಿಗಳ ಪ್ರಕಾರ ಸೇವಾ ತೆರಿಗೆ (4%) ಮತ್ತು ಆದಾಯ ತೆರಿಗೆ (2.3%) ಗಳನ್ನು ಮೂಲ ಬಿಲ್ಲಿನಲ್ಲಿಯೇ ಕಟಾವು ಮಾಡಲಾಗುವುದು.
14. ಮೇಲೆ ತಿಳಿಸಿರುವ ಟೆಂಡರಿನ ನಿಬಂಧನೆಗಳನ್ನು ದೃಢೀಕರಿಸುವ ಕರಾರು ಒಪ್ಪಿಗೆ ಪತ್ರವನ್ನು ರೂ. 20.00 ಬೆಲೆಯ ಸ್ಟಾಂಪ್ ಪೇಪರ್ ಮೇಲೆ ಬರೆದು ಸಹಿ ಮಾಡಿ ನೀಡಬೇಕು.

ಹೆಚ್ಚಿನ ಮಾಹಿತಿಗಳಿಗಾಗಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಅಂಗಾಂಶ ಕೃಷಿ) ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

ತೋಟಗಾರಿಕೆ ನಿರ್ದೇಶಕರು

**DEPARTMENT OF HORTICULTURE**

**Directorate of Horticultre Biotechnology Centre, Hulimavu, PO Box No. 7648, Bangalore-560 076**

**No:DH:BIOTECH:SADH:TC:AHO1:80:2003-04, Dated: 25th February 2004**

**TENDER NOTICE**

Sealed tenders are invited to carryout various Laboratory works, propagation works, horticultural works, farm maintenance works, equipment's maintenance works and others of Tissue Culture

Laboratory, Plant Nutrition Laboratoy, Quality Control Laboratory, Mushroom Production Unit, DNA Finger Printing Laboratoy and Hulimavu Horticulure Farm at Biotechnology Centre, Hulimavu, Bangalore-76 on contract basis during 2004-05 from various firms, tenderers. The tender forms, terms and conditions and technical specifications may be obtained rom the office of the **Senior Assistant Director of Horticulture (Tissue Culture),** Biotechnoloy Centre, Hulimavu, Bangalore-76 during office hours from 16-03-2004 to 27-03-2004.

Application fee for each tender from is Rs. 25/-. The sealed tenders prescribed on the cover as **"TENDER FOR CARRYING OUT VARIOUS LABORATORY WORKS/PROPAGATION WORKS/ HORTICULTURAL WORKS/FARM MAINTENANCE WORKS, EQUIPMENT'S MAINTENANCE WORKS AND OTHERS ON CONTACT BASIS"** of Tissue Culture Laboratory, Plant Nutrition Laboratory, Quality Control Laboratory, Mushroom Production Unit, DNA Finger Printing Laboratory and Hulimavu Horticultue Farm quoted separately may be sent either through pot or in person so as to reach Senior Assistant Director of Horticulture (Tissue Culture), Biotechnology Centre, Hulimavu, Bangalore-76 on or before 2 p.m. of 29.03.2004

Tenders will be opened on the same day i.e., 29/03/2004 at 4.00 p.m in the premises of Biotechnology Centre, Hulimavu, Bangalore-76

DIRECTOR OF HORTICULTURE

**TERMS AND CONDITION OF THE TENDER**

1. The cost of the tender form is Rs.25/- each (Non refundable). The tender should be applied separately to each category.
2. Tender form can be obtained from 16-03-2004 to 27-03-2004 from the Office of the Senior Assistant Director of Horticulture (Tissue Culture), Biotechnology Centre, Hulimavu, Bangalore 76 during office hours.
3. Sealed tenders will be accepted till 2.00 pm of 29.03.2004. Tenders sent after 2.00 pm of that day will not be accepted. Tenders will be opened at 4.00 pm on the same day (29-03-2004) at Biotechnology Centre, Hulimavu, Bangalore-76.
4. Complete details of technical specifications, terms, and quality details can be obtained from the Office of the Senior Assistant Director of Horticulture (Tissue Culture), Biotechnology Centre, Hulimavu, Bangalore-76 during office hours.
5. EMD of Rs. 5,000/- as an initial deposit for each group of works of each Laboratory should be submitted through crossed Demand Draft along with the tender farm. Cheques and National Saving Certificates will not be accepted.
6. Crossed Demand draft should be obtained from any Nationalized Banks in Bangalore in the name of the Senior Assistant Director of Horticulture (Tissue Culture), Bangalore.
7. Lowest Price for works to be carried out on contract basis must be quoted in the tender form.
8. The rates quoted should be inclusive of all taxes and insurance charges.
9. Technical tenders and financial tenders should be given in separate sealed envelopes and envelope should be subscribed as technical tender of financial tender as the case may be for the contract works.
10. The tenderers shall ensure quality of the work carried out throughout the contract period.
11. Regarding the contract works, priority will be given to those who have the work experience of working in any Government/private laboratories earlier.
12. Director of Horticulture has the power to accept or reject the tenders without assigning any reasons.
13. The supplier shall enclose the income tax clearance certificate along with the tender.
14. As per the Government norms work contract tax (@ 4%) and Income tax (2.3%) will be deducted at source.
15. The acceptance of the above rules and regulations must be given in writing on a stamped paper with signature & seal.

(Further details can be obtained from the office of the Senior Assistant Director of Horticulture (Tissue Culture), Biotechnology Centre, Hulimavu, Bangalore-76 during office hours)

P.R. 140 DIRECTOR OF HORTICULTURE

**ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು-1**

**(See Rule 9)**

**NOTIFICATION**

**SREE M. MADAIAH** working as Senior Lecturer in the Sree Siddartha First Grade College, is permitted to change his name to **M. MADEV BHARANI.**

PD-37 ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು-1.